2) ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.

3) ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.

4) ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

5) ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.

6) ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.

7) ಅಭ್ಯರ್ಥಿಯು ತಮ್ಮ passport size ನ ಎರಡು ಇತ್ತೀಚಿನ ಫೋಟೋಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

8) ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಅಂಕಪಟ್ಟಿಯನ್ನು ಮತ್ತು ಪ್ರಮಾಣ ಪತ್ರಗಳನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

9) ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

10) ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾವಿಧಿ) ಬರೆದುಕೊಡತಕ್ಕದ್ದು.

11) ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

12) ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

13) ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966ರಲ್ಲಿನ ನಿಯಮ 28ರ ರೀತ್ಯ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.

14) ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.

15) ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.

16) ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಯಾವುದೇ ಕಾರಣ ನೀಡದೆ ಅಥವಾ ಯಾವುದೇ ಸೂಚನೆ ಇಲ್ಲದೆ ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ

ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

17) ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಕಾರಣ ನೀಡದೇ ಅಥವಾ ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು.

18) ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.

19) ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲಿ ಪುರಸ್ಕರಿಸಲಾಗುವುದಿಲ್ಲ.

20) ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.

21) ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಕಾರಣ ನೀಡದೆ ಅಥವಾ ಯಾವುದೇ ಸೂಚನೆ ಇಲ್ಲದೆ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ. ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

22) ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

23) ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ, ಸರ್ಕಾರದವರು ದಿನಾಂಕ:01.04.2006 ರಿಂದ ಜಾರಿಗೆ ಬರುವಂತೆ ಉಲ್ಲೇಖ (9)ರ ಸರ್ಕಾರದ ಆದೇಶದಲ್ಲಿ ಹೊಸದಾಗಿ New Defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ:01.04.2006ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಸದರಿ ನೌಕರರು ಸರ್ಕಾರದ ಉಲ್ಲೇಖ (9)ರ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

ಜಿಲ್ಲಾ ನೋಂದಣಾಧಿಕಾರಿಗಳು,
ಹಾವೇರಿ ಜಿಲ್ಲೆ, ಹಾವೇರಿ.

ಪಿ.ಆರ್.14

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ಜೈ ಭಾರತ್ ಕೃಷಿ ಉಪಕರಣಗಳ ಉತ್ಪಾದನಾ ಮತ್ತು ಮಾರಾಟ ಗ್ರಾಮೋದ್ಯೋಗ ಕೈಗಾರಿಕಾ ಸಹಕಾರ ಸಂಘ ನಿ., ಕೊಡಗನೂರು ದಾವಣಗೆರೆ ತಾ: ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:14.03.2007.
2) ಸಹಕಾರ ಸಂಘಗಳ ಸಹಾಯಕರ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ರವರು ಸಲ್ಲಿಸಿರುವ ಪ್ರಸ್ತಾವೆ ದಿನಾಂಕ:20.12.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್ 31/ ಆರ್‌ಜಿಎನ್/ 27095/ 2000-01 ದಿನಾಂಕ:05.05.2000ರಲ್ಲಿ ನೋಂದಣೆಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು-2ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ: ಎಲ್‌ಕ್ಯೂಡಿ: ಸಿಆರ್-50: 2006-07, ದಿನಾಂಕ:26ನೇ ಡಿಸೆಂಬರ್, 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ: 2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಟಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಜೈ ಭಾರತ್ ಕೃಷಿ ಉಪಕರಣಗಳ ಉತ್ಪಾದನಾ ಮತ್ತು ಮಾರಾಟ ಗ್ರಾಮೋದ್ಯೋಗ ಕೈಗಾರಿಕಾ ಸಹಕಾರ ಸಂಘ ನಿ., ಕೊಡಗನೂರು, ದಾವಣಗೆರೆ ತಾ:, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:26.12.2007 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.25

## GOVERNMENT OF KARNATAKA,
## DIRECTORATE OF ECONOMICS AND STATISTICS, BANGALORE-1
### Consumer Price Index Numbers For Industrial Workers

No. DES 25 PWX 2007 Month: October, 2007

State: Karnataka Base: 1987-88=100 Date : 29-12-2007

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** (a) Cereals & Products | 428 | 460 | 463 | 414 | 445 | 410 | 410 | 420 | 359 | 399 | 453 |
| | (b) Pulses & Products | 404 | 425 | 448 | 462 | 400 | 414 | 427 | 458 | 395 | 405 | 436 |
| | (c) Oil & Fats | 283 | 306 | 299 | 315 | 290 | 302 | 273 | 298 | 247 | 323 | 289 |
| | (d) Meat, Fish & Eggs | 460 | 472 | 439 | 438 | 456 | 422 | 415 | 447 | 612 | 513 | 428 |
| | (e) Milk & Products | 356 | 302 | 352 | 334 | 338 | 392 | 279 | 366 | 311 | 340 | 304 |
| | (f) Condiments & Spices | 344 | 400 | 485 | 506 | 419 | 463 | 403 | 372 | 358 | 466 | 391 |
| | (g) Vegetables & Fruits | 402 | 342 | 581 | 514 | 428 | 416 | 372 | 562 | 353 | 375 | 505 |
| | (h) Other Food | 298 | 407 | 371 | 409 | 381 | 299 | 312 | 291 | 288 | 338 | 316 |
| | **FOOD GROUP INDEX** | **386** | **405** | **436** | **418** | **404** | **388** | **368** | **406** | **374** | **391** | **397** |
| II. | Pan, Supari, Tobacco & Intoxicants | 357 | 409 | 419 | 345 | 269 | 473 | 322 | 478 | 291 | 315 | 318 |
| III. | Fuel & Light | 398 | 330 | 318 | 457 | 322 | 351 | 361 | 333 | 291 | 481 | 300 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 264 | 258 | 255 | 376 | 283 | 266 | 368 | 381 | 242 | 480 | 215 |

| 1 | | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|---|
| VI. | **MISCELLANEOUS:** | | | | | | | | | | | |
| | (a) Medical Care | 614 | 756 | 400 | 270 | 251 | 284 | 385 | 329 | 350 | 418 | 236 |
| | (b) Education, Recreation & Amusement | 360 | 420 | 494 | 236 | 400 | 478 | 348 | 303 | 531 | 499 | 415 |
| | (c) Transport & Communication | 419 | 433 | 358 | 655 | 595 | 424 | 400 | 566 | 608 | 390 | 444 |
| | (d) Personal Care & effects | 274 | 285 | 264 | 283 | 292 | 265 | 295 | 301 | 299 | 279 | 273 |
| | (e) Others | 353 | 359 | 309 | 450 | 272 | 273 | 275 | 290 | 249 | 485 | 257 |
| | Miscellaneous Group | 390 | 397 | 345 | 346 | 335 | 329 | 328 | 314 | 394 | 412 | 307 |
| | **GENERAL INDEX** | **344** | **350** | **355** | **372** | **330** | **329** | **328** | **351** | **331** | **375** | **302** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **...** | **...** |

Joint Director,
Directorate of Economics
and Statistics, Bangalore.

**Government of India,**
**Ministry of Labour (Labour Bureau)**
**No. 112/1(KTK)/2006-NCPI**

'Cleremount' Shimla-171 004

**CONSUMER PRICE INDEX NUMBERS FOR INDUSTRIAL WORKERS (BASE-2001=100)**

State: Karnataka Month: October, 2007

| Code | Group/Sub-group/ Centre | Bangalore | Belgaum | Hubli Dharwar | Mercara | Mysore |
|---|---|---|---|---|---|---|
| | 1 | 2 | 3 | 4 | 5 | 6 |
| 1000 | **I A:FOOD:** | | | | | |
| 1100 | (a) Cereals & Products | 135 | 142 | 136 | 115 | 129 |
| 1200 | (b) Pulses & Products | 137 | 144 | 146 | 137 | 133 |
| 1300 | (c) Oils & Fats | 187 | 178 | 167 | 158 | 149 |
| 1400 | (d) Meat, Fish & Eggs | 146 | 159 | 150 | 134 | 150 |
| 1500 | (e) Milk & Products | 126 | 120 | 111 | 125 | 132 |
| 1600 | (f) Condiments & Spices | 154 | 145 | 141 | 140 | 156 |
| 1700 | (g) Vegetables & Fruits | 144 | 152 | 137 | 133 | 138 |
| 1800 | (h) Other Food | 135 | 132 | 132 | 124 | 126 |
| 1000 | **I-A FOOD GROUP** | 140 | 142 | 137 | 127 | 134 |
| 2000 | I-Pan, Supari, Tobacco & Intoxicants | 146 | 115 | 122 | 105 | 132 |
| 3000 | II-Fuel & Light | 143 | 137 | 133 | 105 | 149 |
| 4000 | III-Housing Index | 135 | 117 | 127 | 104 | 121 |
| 5000 | IV-Clothing, Bedding & Footwear | 96 | 107 | 105 | 116 | 106 |
| 6000 | **V-Miscellaneous:** | | | | | |
| 6100 | (a) Medical Care | 141 | 140 | 138 | 129 | 130 |
| 6200 | (b) Education, Recreation & Amusement | 135 | 135 | 131 | 128 | 113 |
| 6300 | (c) Transport & Communication | 172 | 183 | 178 | 160 | 154 |
| 6400 | (d) Personal Care & effects | 131 | 125 | 125 | 120 | 126 |
| 6500 | (e) Others | 120 | 115 | 120 | 119 | 140 |
| 6600 | Miscellaneous Group | 146 | 140 | 140 | 132 | 132 |
| | **GENERAL INDEX** | **138** | **136** | **134** | **121** | **131** |

Joint Director,
Directorate of Economics
and Statistics, Bangalore.

**GOVERNMENT OF KARNATAKA,**
**DIRECTORATE OF ECONOMICS AND STATISTICS, BANGALORE-1**
**Consumer Price Index Numbers For Industrial Workers**

No. DES 25 PWX 2007 Month: September, 2007

State: Karnataka Base: 1987-88=100 Date : 28-11-2007

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:**<br>(a) Cereals & Products | 429 | 462 | 459 | 411 | 446 | 401 | 406 | 411 | 355 | 396 | 448 |
| | (b) Pulses & Products | 409 | 419 | 447 | 462 | 377 | 412 | 403 | 457 | 392 | 394 | 420 |
| | (c) Oil & Fats | 274 | 308 | 290 | 315 | 288 | 302 | 270 | 298 | 246 | 325 | 289 |
| | (d) Meat, Fish & Eggs | 457 | 461 | 429 | 399 | 429 | 412 | 416 | 440 | 612 | 513 | 428 |
| | (e) Milk & Products | 343 | 302 | 352 | 334 | 338 | 392 | 279 | 366 | 311 | 340 | 304 |
| | (f) Condiments & Spices | 353 | 418 | 481 | 530 | 407 | 461 | 410 | 372 | 358 | 434 | 408 |
| | (g) Vegetables & Fruits | 375 | 317 | 557 | 477 | 380 | 412 | 389 | 553 | 352 | 333 | 474 |
| | (h) Other Food | 298 | 413 | 373 | 408 | 398 | 299 | 311 | 291 | 289 | 340 | 319 |
| | **FOOD GROUP INDEX** | **382** | **404** | **431** | **413** | **398** | **384** | **367** | **401** | **373** | **384** | **393** |
| II. | Pan, Supari, Tobacco & Intoxicants | 362 | 404 | 417 | 345 | 268 | 473 | 322 | 478 | 291 | 315 | 316 |
| III. | Fuel & Light | 399 | 327 | 318 | 457 | 322 | 351 | 361 | 333 | 291 | 481 | 300 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 263 | 258 | 255 | 376 | 283 | 266 | 368 | 381 | 242 | 488 | 215 |
| VI. | **MISCELLANEOUS:**<br>(a) Medical Care | 614 | 756 | 386 | 270 | 251 | 284 | 385 | 329 | 350 | 418 | 236 |
| | (b) Education, Recreation & Amusement | 360 | 420 | 494 | 236 | 400 | 478 | 348 | 303 | 531 | 390 | 415 |
| | (c) Transport & Communication | 419 | 433 | 358 | 655 | 595 | 424 | 400 | 566 | 608 | 390 | 444 |
| | (d) Personal Care & effects | 274 | 284 | 264 | 278 | 300 | 259 | 295 | 301 | 299 | 279 | 272 |
| | (e) Others<br>Miscellaneous Group | 353<br>390 | 359<br>397 | 309<br>343 | 460<br>348 | 272<br>337 | 273<br>328 | 275<br>328 | 290<br>314 | 245<br>393 | 485<br>395 | 256<br>306 |
| | **GENERAL INDEX** | **342** | **349** | **352** | **370** | **327** | **327** | **328** | **349** | **330** | **370** | **301** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **...** | **...** |

Joint Director,
Directorate of Economics
and Statistics, Bangalore.

**Government of India,**
**Ministry of Labour (Labour Bureau)**
**No. 112/1(KTK)/2006-NCPI**

'Cleremount' Shimla-171 004

**CONSUMER PRICE INDEX NUMBERS FOR INDUSTRIAL WORKERS (BASE-2001=100)**

State: Karnataka Month: October, 2007

| Code | Group/Sub-group/ Centre | Bangalore | Belgaum | Hubli Dharwar | Mercara | Mysore |
|---|---|---|---|---|---|---|
| | 1 | 2 | 3 | 4 | 5 | 6 |
| 1000 | **I A:FOOD:** | | | | | |
| 1100 | (a) Cereals & Products | 133 | 140 | 135 | 115 | 127 |
| 1200 | (b) Pulses & Products | 135 | 142 | 140 | 135 | 133 |
| 1300 | (c) Oils & Fats | 187 | 171 | 166 | 158 | 149 |
| 1400 | (d) Meat, Fish & Eggs | 146 | 158 | 149 | 137 | 151 |
| 1500 | (e) Milk & Products | 128 | 120 | 111 | 125 | 132 |
| 1600 | (f) Condiments & Spices | 159 | 151 | 141 | 141 | 155 |
| 1700 | (g) Vegetables & Fruits | 139 | 137 | 129 | 136 | 130 |
| 1800 | (h) Other Food | 135 | 132 | 133 | 123 | 126 |
| 1000 | **I-A FOOD GROUP** | 139 | 140 | 135 | 127 | 133 |
| 2000 | I-Pan, Supari, Tobacco & Intoxicants | 146 | 115 | 123 | 105 | 132 |
| 3000 | II-Fuel & Light | 144 | 141 | 134 | 104 | 149 |
| 4000 | III-Housing Index | 135 | 117 | 127 | 104 | 121 |
| 5000 | IV-Clothing, Bedding & Footwear | 98 | 109 | 109 | 116 | 106 |
| 6000 | **V-Miscellaneous:** | | | | | |
| 6100 | (a) Medical Care | 141 | 140 | 138 | 130 | 130 |
| 6200 | (b) Education, Recreation & Amusement | 135 | 134 | 131 | 128 | 112 |
| 6300 | (c) Transport & Communication | 172 | 183 | 178 | 154 | 154 |
| 6400 | (d) Personal Care & effects | 128 | 123 | 125 | 120 | 126 |
| 6500 | (e) Others | 119 | 116 | 120 | 119 | 140 |
| 6600 | Miscellaneous Group | 145 | 140 | 140 | 130 | 131 |
| | **GENERAL INDEX** | **137** | **135** | **133** | **121** | **130** |

Joint Director,
Directorate of Economics
and Statistics, Bangalore.

PR-31

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**
**ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ರವರ ಕಛೇರಿ, ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ., ಕೋಲಾರ**
**ಕ್ರಮಾಂಕ: ಇಇಇ/ ಸ.ಕಾ.ಇ./ ಬೃ.ಕಾ.ವಿ./07–08/ 3373, ದಿನಾಂಕ:26ನೇ ಫೆಬ್ರವರಿ, 2008**
**ಯೋಜನಾ ಪ್ರಕಟಣೆ**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯಿದೆ 2003 ಸೆಕ್ಷನ್ 67 ಅಡಿಯಲ್ಲಿ ಈ ಕೆಳಕಂಡ ಯೋಜನೆಗಳನ್ನು ರೂಪಿಸಿದೆ ಮತ್ತು ಇದೇ ಕಾಯಿದೆ ಸೆಕ್ಷನ್ 67 (2) (ಸಿ) ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಯೋಜನೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನೂ ಇತರೆ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಈ ಯೋಜನೆಗಳ ವಿವರಗಳು ಕೆಳಕಂಡಂತಿವೆ.

ಕೆಲಸದ ಹೆಸರು: ಕೋಲಾರ ಜಿಲ್ಲೆಯಲ್ಲಿ ಕೈಗೆತ್ತಿಕೊಂಡಿರುವ 66 ಕೆ.ವಿ. ಲಿಲೋ/ ಜೋಡಿ/ ಏಕ ಮಾರ್ಗ ಲೈನ್ ನಿರ್ಮಾಣ ಕೆಲಸ.

**1) ದಿಬ್ಬೂರಹಳ್ಳಿ–** ಇರಗಂಪಲ್ಲಿ 66 ಕೆ.ವಿ. ಜೋಡಿ ಮಾರ್ಗ ಲೈನ್‌ನಿಂದ ಉದ್ದೇಶಿತ ಗಂಜಿಗುಂಟೆ 66/11 ಕೆ.ವಿ. ವಿದ್ಯುತ್ ಉಪ–ಕೇಂದ್ರದವರೆಗೆ 66 ಕೆ.ವಿ. ಏಕ ಮಾರ್ಗ ಲೈನನ್ನು ಜೋಡಿ ಮಾರ್ಗ ಸ್ಥಾವರಗಳ ಮೇಲೆ ನಿರ್ಮಾಣ ಮಾಡುವ ಕೆಲಸವನ್ನು ಅಂದಾಜು ವೆಚ್ಚ 156.67 ಲಕ್ಷದಲ್ಲಿ ನಿರ್ಮಿಸುತ್ತಿದ್ದು ಲೈನ್ ಮಾರ್ಗವು 9.153 ಕಿ.ಮೀ. ಉದ್ದವಿದ್ದು ಈ ಕೆಳಕಂಡ ಹಳ್ಳಿಗಳ ಎಲ್ಲೆಯಲ್ಲಿ ಹಾದು ಹೋಗುತ್ತದೆ. (1) ಗಂಜಿಗುಂಟೆ, (2) ಬಪನಹಳ್ಳಿ (3) ಜೊಕ್ಕನಪಲ್ಲಿ (4) ಕುರುಪುರಹಳ್ಳಿ (5) ಪುಲಗುಂಟಹಳ್ಳಿ (6) ಮಡೇನಹಳ್ಳಿ (7) ನಕ್ಕಲಪಲ್ಲಿ (8) ದಾಸರಪಲ್ಲಿ (9) ತಲಕಾಯಲಬೆಟ್ಟ.

**2) ಏನಿಗದೆಲೆ–** ಚಾಕವೇಲು 66 ಕೆ.ವಿ. ಏಕಮಾರ್ಗ ಲೈನ್‌ನಿಂದ ಚಾಲನೆಯಲ್ಲಿರುವ ಸೋಮನಾಥಪುರ 66/11 ಕೆ.ವಿ. ವಿದ್ಯುತ್ ಉಪ–ಕೇಂದ್ರದವರೆಗೆ 66 ಕೆ.ವಿ. ಏಕಮಾರ್ಗ ಲೈನನ್ನು ಜೋಡಿ ಮಾರ್ಗ ಸ್ಥಾವರಗಳ ಮೇಲೆ ನಿರ್ಮಾಣ ಮಾಡುವ ಕೆಲಸವನ್ನು ಅಂದಾಜು ವೆಚ್ಚ 152.71 ಲಕ್ಷದಲ್ಲಿ ನಿರ್ಮಿಸುತ್ತಿದ್ದು ಲೈನ್ ಮಾರ್ಗವು 6.87 ಕಿ.ಮೀ. ಉದ್ದವಿದ್ದು ಈ ಕೆಳಕಂಡ ಹಳ್ಳಿಗಳ ಎಲ್ಲೆಯಲ್ಲಿ ಹಾದು ಹೋಗುತ್ತದೆ. (1) ಬಾಗೇಪಲ್ಲಿ (2) ಕೊತ್ತಪಲ್ಲಿ (3) ಕೊಂಡಮಾವರಪಲ್ಲಿ (4) ದೇವರಗುಡಿಪಲ್ಲಿ (5) ದಾಸಯ್ಯಗಾರಿಪಲ್ಲಿ (6) ಉಗ್ಗನಗೆಪಲ್ಲಿ (7) ಪೇದಟುಮಾಕೇಪಲ್ಲಿ (8) ಲಗೂಮಾದೇಪಲ್ಲಿ (9) ಮರಿಮಾಕಲಪಲ್ಲಿ (10) ಗುರಲದಿನ್ನೆ (11) ನಿರುಕುಂಟಪಲ್ಲಿ (12) ಕನಮಕುಂಟೆಪಲ್ಲಿ (13) ಗುಟ್ಟಮಿಡಪಲ್ಲಿ (14) ಕೊಗರಲಪಲ್ಲಿ (15) ಪಾತಪಾಳ್ಯ ಎಲ್ಲೆ (16) ಬೈರೇಪಲ್ಲಿ (17) ಶೀಗಲಪಲ್ಲಿ (18) ನಕ್ಕಲಪಲ್ಲಿ (19) ಸೋಮನಾಥಪುರ.

3) **ಕೆ.ಜಿ.ಎಫ್–**ಕ್ಯಾಸಂಬಳ್ಳಿ 66 ಕೆ.ವಿ. ಲೈನ್‌ನಿಂದ ಉದ್ದೇಶಿತ ಬೇತಮಂಗಲ 66/11 ಕೆ.ವಿ. ವಿದ್ಯುತ್ ಉಪ–ಕೇಂದ್ರದವರೆಗೆ 66 ಕೆ.ವಿ. ಏಕಮಾರ್ಗ ಲೈನನ್ನು ಜೋಡಿ ಮಾರ್ಗ ಸ್ಥಾವರಗಳ ಮೇಲೆ ನಿರ್ಮಾಣ ಮಾಡುವ ಕೆಲಸವನ್ನು ಅಂದಾಜು ವೆಚ್ಚ 102.71 ಲಕ್ಷದಲ್ಲಿ ನಿರ್ಮಿಸುತ್ತಿದ್ದು ಲೈನ್ ಮಾರ್ಗವು 5.5 ಕಿ.ಮೀ. ಉದ್ದವಿದ್ದು ಈ ಕೆಳಕಂಡ ಹಳ್ಳಿಗಳ ಎಲ್ಲೆಯಲ್ಲಿ ಹಾದು ಹೋಗುತ್ತದೆ. (1) ಕ್ಯಾಸಂಬಳ್ಳಿ (2) ಬಲುವನಹಳ್ಳಿ (3) ಕಂಬಪಲ್ಲಿ (4) ದೊಡ್ಡಕೆರೆ.

**4) ಪೆರೇಸಂದ್ರ–** ದಿಬ್ಬೂರಹಳ್ಳಿ 66 ಕೆ.ವಿ. ಏಕಮಾರ್ಗ ಲೈನ್‌ನಿಂದ ಉದ್ದೇಶಿತ ಸೋಮೇನಹಳ್ಳಿ 66/11 ಕೆ.ವಿ. ವಿದ್ಯುತ್ ಉಪ–ಕೇಂದ್ರದವರೆಗೆ 66 ಕೆ.ವಿ. ಏಕಮಾರ್ಗ ಲೈನನ್ನು ಜೋಡಿ ಮಾರ್ಗ ಸ್ಥಾವರಗಳ ಮೇಲೆ ನಿರ್ಮಾಣ ಮಾಡುವ ಕೆಲಸವನ್ನು ಅಂದಾಜು ವೆಚ್ಚ 160.08 ಲಕ್ಷದಲ್ಲಿ ನಿರ್ಮಿಸುತ್ತಿದ್ದು ಲೈನ್ ಮಾರ್ಗವು 7.87 ಕಿ.ಮೀ. ಉದ್ದವಿದು ಈ ಕೆಳಕಂಡ ಹಳ್ಳಿಗಳ ಎಲ್ಲೆಯಲ್ಲಿ ಹಾದು ಹೋಗುತ್ತದೆ. (1) ಹೂವಿನಹಾರ ಹಳ್ಳಿ (2) ಕರಿದೇವರಹಳ್ಳಿ (3) ಕಸವಗುಟ್ಟ ಹಳ್ಳಿ (4) ಮುಟ್ಟರೆಡ್ಡಿ ಹಳ್ಳಿ (5) ಕಡದಹಳ್ಳಿ (6) ಗಂಗನಹಳ್ಳಿ (7) ಕನಕಪರಮೇಶ್ವರಿ ನಗರ.

ಮೇಲಿನ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ನಿಯಮ 1885 (13)ರ ಅನ್ವಯ ಟೆಲಿಗ್ರಾಫ್ ಅಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರವನ್ನು ಕ.ವಿ.ಪ್ರ.ನಿ.ನಿ. ಹೊಂದಿರುವುದು ಮತ್ತು ಅಧಿಕಾರವನ್ನು ಕ.ವಿ.ಪ್ರ.ನಿ.ನಿ. ಚಲಾಯಿಸುವುದು ಮೇಲಿನ ಯೋಜನೆಯ ಬಗ್ಗೆ ಯಾವುದೇ ಆಕ್ಷೇಪಣೆಗಳು ಇದ್ದಲ್ಲಿ ಸದರಿ ಪ್ರಕಟಣೆ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ಒಳಗೆ ಕ.ವಿ.ಪ್ರ.ನಿ.ನಿ. ಅವಗಾಹನೆಗಾಗಿ ಕೆಳಸಹಿದಾರರ ಕಛೇರಿಗೆ ಕಳುಹಿಸಬಹುದು.

ಕಾರ್ಯನಿರ್ವಾಹಕ ಅಭಿಯಂತರರು (ವಿ),
ಬೃಹತ್ ಕಾಮಗಾರಿ ವಿಭಾಗ,
ಕ.ವಿ.ಪ್ರ.ನಿ.ನಿ. ಕೋಲಾರ.

ಪಿ.ಡಿ.31

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ದಿ ಸದರನ್ ರೈಲ್ವೇ ನೌಕರರ ಗ್ರಾಹಕರ ಸಹಕಾರ ಸಂಘ ನಿ., ಹರಿಹರ, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:20.01.2007.

2) ಸಹಕಾರ ಸಂಘಗಳ ಸಹಾಯಕರ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ರವರು ಸಲ್ಲಿಸಿರುವ ಪ್ರಸ್ತಾವೆ ದಿನಾಂಕ:17.12.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್‌ಡಿ. 311/ ದಿನಾಂಕ:28.07.1969ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಿಹರ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

**ಸಂಖ್ಯೆ: ಡಿಆರ್:ಡಿವಿಜಿ: ಎಲ್‌ಕ್ಯೂಡಿ: ಸಿಆರ್–31: 2006–07, ದಿನಾಂಕ:26ನೇ ಡಿಸೆಂಬರ್, 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ: 2001, ದಿನಾಂಕ:21.11.2001ರ ಪ್ರಕಾರ ದತ್ತವಾದ

ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಟಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ದಿ ಸದರನ್ ರೈಲ್ವೇ ನೌಕರರ ಗ್ರಾಹಕರ ಸಹಕಾರ ಸಂಘ ನಿ., ಹರಿಹರ, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:26.12.2007 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್.27 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ನಂ.ಡಿಆರ್‌ಬಿ/ ಆರ್/ ನೋಂದಣಿ ರದ್ಧತಿ/ 17/ 2007–08, ದಿನಾಂಕ:14ನೇ ಡಿಸೆಂಬರ್, 2007**

**ವಿಷಯ:** ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಾರಹಳ್ಳಿ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**1) ಸಹಕಾರ ಅಭಿವೃದ್ಧಿ ಅಧಿಕಾರಿಯವರ ಪತ್ರ ಸಂಖ್ಯೆ: ಸಅಅದೇತಾ/ ನೋಂದಣಿ ರದ್ಧತಿ/ 2007–08, ದಿನಾಂಕ:15.11.2007.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ/ ಆರ್/ ಎಲ್‌ಕ್ಯೂಡಿ/ 76/ 06–07, ದಿನಾಂಕ:04.11.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಕಛೇರಿಯಲ್ಲಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಾರಹಳ್ಳಿ, ದೇವನಹಳ್ಳಿ ತಾಲ್ಲೂಕು ಈ ಸಂಘವು ಸಂ: ಎಆರ್47/ ನೋಂದಣಿ/ 30102/ 2000–01 ದಿನಾಂಕ:30.09.2000ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಾರಹಳ್ಳಿ, ದೇವನಹಳ್ಳಿ, ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ–69/ ಸಿಎಲ್ಎಂ/ 2001, ದಿನಾಂಕ:21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಾರಹಳ್ಳಿ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಎಆರ್47/ ನೋಂದಣಿ/ 30102/ 2000–01 ದಿನಾಂಕ:30.09.2000ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:14.12.2007 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್.23 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**IN THE COURT OF 5TH A.C.M.M, BANGALORE CITY**

It is hereby notified for the information of the public that the under mentioned Two-wheelers which are in the custody of chandra lay-out Police station Bangalore city, as unclaimed shall be confiscated to the Government and disposed of according to law. If not claimed by the owner with proof of ownership within **One month** from the date of the publication of this notification.

| Sl. No. | Cimiss Number | P.F. No. | Item No. | Vehicle | Engine Number | Chasis Number |
|---|---|---|---|---|---|---|
| 1. | 109/08 | 17/08 | 1 | Bajaj Chetak Scooter KA-02-L-009 Blue | 06M94D31792 | 06F94D52796 |
| 2. | 109/08 | 17/08 | 2 | Yamaha RX-135 KA-02-EA-4783 Meroon | 4TL509846 | 01H4TL509846 |
| 3. | 110/08 | 18/08 | 1 | Suzuki Samurai Motor Cycle KA-01-R-3564 Black | 7911M516669 | 7911F466510 |
| 4. | 114/08 | 19/08 | 1 | Hero Puch KA-02-Xz-7729 Orange | EB685387 | - |
| 5. | 114/08 | 19/08 | 2 | T.V.S. Scooty KA-02-V-243 Black | K97GM-121890 | - |
| 6. | 115/08 | 20/08 | 1 | T.V.S. Victor KA-02-EQ-5891 Black | OF1A51332353 | MD625EF1851A606 |
| 7. | 115/08 | 20/08 | 2 | Bajaj Chethak M.E.R.-332 Blue | 06B809067965 | - |
| 8. | 118/08 | 21/08 | 2 | Hero Honda CD-100 KA-18-H-8372 Red | 99C10E04663 | - |
| 9. | 118/08 | 21/08 | 3 | Yamaha RX-100 No not Known Blue | 1L1310657 | 210657 |
| 10. | 120/08 | 22/08 | 1 | Hero Honda Splendor KA-03-E-2323 Black | 1S80778H3080 | 98J19F07077 |
| 11. | 120/08 | 22/08 | 2 | Bajaj Discover KA-03-EU-2922 Blue | DSGBMG28639 | DSVBMG02540 |
| 12. | 121/08 | 23/08 | 1 | T.V.S. XL-Super No Not-Known Green | P1208M624983 | P3208 639 |
| 13. | 121/08 | 23/08 | 2 | Bajaj Chethak CAB-2665 | 05E8007041786 | 1LC1L11706 |
| 14. | 125/08 | 25/08 | 1 | Bajaj Scooter KA-03-H-3782 Gray | M06CB108564 | F06CE109175 |
| 15. | 125/08 | 25/08 | 2 | Bajaj Scooter KA-04-U-2527 Blue | 35MBDH00635 | D6FBDR89751 |
| 16. | 126/08 | 26/08 | 2 | Bajaj CT-100 KA-05-S-9154 Blue | DUMBLD67789 | DUFBLD09123 |
| 17. | 418/04 | 15A/04 | - | A/R No.CAW-2292 Black | Nil | 02C809073413 |

Vth Addl. Chief Metropolitan
Magistrate, Bangalore.

PR-295

**ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಹಾಸನ ಜಿಲ್ಲೆ, ಹಾಸನ–573201**

**ಅಧಿಸೂಚನೆ ಸಂಖ್ಯೆ: ಎಡಿಎಂ/04/06–07, ದಿನಾಂಕ:2ನೇ ನವೆಂಬರ್, 2007**

**ವಿಷಯ:** ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 4(1) (ಬಿ) ಅನ್ವಯ ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಹಾಸನ ಜಿಲ್ಲೆ, ಹಾಸನ ಕಛೇರಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒಳಗೊಂಡ ಕೈಪಿಡಿ ಪ್ರಕಟಿಸುವ ಬಗ್ಗೆ.

ಉಲ್ಲೇಖ: 1) ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಎಡಿಎಂ/4/06–07 ದಿನಾಂಕ:24.05.2007.
2) ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಾಮುಅ/ 01/07–08, ದಿನಾಂಕ:03.07.2007 ಮತ್ತು 05.10.2007.

ಮೇಲ್ಕಂಡ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಸದರಿ ಅಧಿನಿಯಮ 2005ರ (ಕೇಂದ್ರ ಅಧಿನಿಯಮ ಸಂಖ್ಯೆ: 22) ಸೆಕ್ಷನ್ 5(1) 5(2) ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕಛೇರಿಗೆ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಿ, ಇಲಾಖೆಯ ವಿವರಗಳು, ಕಾರ್ಯಗಳು, ಕರ್ತವ್ಯಗಳು, ಹುದ್ದೆಗಳ ವಿವರ, ವಿವಿಧ ಯೋಜನೆಗಳ ವಿವರ, ಮಾಹಿತಿ ಪಡೆಯಲು ಸಾರ್ವಜನಿಕರಿಗೆ ದೊರೆಯುವ ಸೌಲಭ್ಯಗಳ ಬಗ್ಗೆ ಮಾಹಿತಿಯನ್ನು ಹೊರಡಿಸಲಾಗಿತ್ತು. ಈಗ ಸದರಿ ಅಧಿಸೂಚನೆಯಲ್ಲಿನ ಮಾಹಿತಿಯನ್ನು ಒಳಗೊಂಡಂತೆ ಇನ್ನು ಹೆಚ್ಚಿನ ವಿಷಯಗಳ ಮೇಲೆ ಇತ್ತೀಚಿನವರೆಗಿನ ಮಾಹಿತಿಯನ್ನು ಸೇರಿಸಿ ಸೆಕ್ಷನ್ 4(1) (ಬಿ) ಅನ್ವಯ ಈ ಅಧಿಸೂಚನೆಯ ಕೈಪಿಡಿಯನ್ನು ಹೊರಡಿಸಲಾಗಿದೆ.

**1. ಕೈಪಿಡಿ 1:**

**ಸಂಸ್ಥೆಯ ಬಗ್ಗೆ ವಿವರಗಳು, ಕಾರ್ಯಗಳು ಮತ್ತು ಕರ್ತವ್ಯಗಳು:**

**(ಅ) ಸಂಸ್ಥೆಯ ಹೆಸರು:** ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಜಿಲ್ಲಾ ಪಂಚಾಯತ್, ಹಾಸನ.

**(ಆ) ರಚನೆ:** ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು ರವರು ಈ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಹಾಸನ, ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು, ಮೀನುಗಾರಿಕೆ ಉಪನಿರ್ದೇಶಕರು, ಮೈಸೂರು ಇವರುಗಳ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರಿಗೆ ಸಹಾಯಕರಾಗಿ ಹಾಸನದ ಕೇಂದ್ರ ಕಛೇರಿ ಮತ್ತು ತಾಲ್ಲೂಕು ಮಟ್ಟದಲ್ಲಿ ಈ ಕೆಳಗಿನಂತೆ ಸಿಬ್ಬಂದಿ ವರ್ಗ ಕಾರ್ಯನಿರ್ವಹಿಸುತ್ತಿದೆ.

**(1) ಕೇಂದ್ರ ಕಛೇರಿಯಲ್ಲಿರುವ ಅಧಿಕಾರಿ ಸಿಬ್ಬಂದಿ ವಿವರ:**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|---|
| 1. | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು | 1 | 1 | – | – |
| 2. | ಕಛೇರಿ ಅಧೀಕ್ಷಕರು | 1 | 1 | – | – |
| 3. | ಪ್ರಥಮ ದರ್ಜೆ ಸಹಾಯಕರು | 1 | 1 | – | – |
| 4. | ದ್ವಿತೀಯ ದರ್ಜೆ ಸಹಾಯಕರು | 2 | 1 | 1 | – |
| 5. | ಬೆರಳಚ್ಚುಗಾರರು | 1 | 1 | – | – |
| 6. | ವಾಹನ ಚಾಲಕರು | 1 | – | 1 | – |
| 7. | ಜವಾನ | 2 | 2 | – | – |
| | ಒಟ್ಟು | 9 | 7 | 2 | – |

**(2) ಅಧೀನ ಕಛೇರಿಗಳಲ್ಲಿರುವ ಸಿಬ್ಬಂದಿ ವಿವರ:**

**(1) ಹಾಸನ ತಾಲ್ಲೂಕು (ಹಾಸನ ಮತ್ತು ಆಲೂರು ತಾಲ್ಲೂಕು ಒಳಗೊಂಡಂತೆ)**

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ–2) | 1 | 1 | – | – |
| 2. | ಮೀನುಗಾರಿಕೆ ಕ್ಷೇತ್ರಪಾಲಕರು | 4 | 3 | 1 | – |
| | ಒಟ್ಟು | 5 | 4 | 1 | |

ಇವರ ನಿಯಂತ್ರಣದಲ್ಲಿ ಒಂದು ಮೀನುಮರಿ ಪಾಲನಾ ಕೇಂದ್ರ ಹಾಸನದಲ್ಲಿ ಮತ್ತು ಹಾಸನದ ಮಹಾರಾಜ ಪಾರ್ಕಿನಲ್ಲಿ ಸರ್ಕಾರಿ ಮತ್ಸ್ಯಾಲಯವನ್ನು ನಿರ್ವಹಿಸಲಾಗುತ್ತಿದೆ.

(2) ಚನ್ನರಾಯಪಟ್ಟಣ ತಾಲ್ಲೂಕು:

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2) | 1 | 1 | – | – |
| 2. | ಮೀನುಗಾರಿಕೆ ಕ್ಷೇತ್ರಪಾಲಕರು | 2 | 1 | 1 | – |
| | ಒಟ್ಟು | 3 | 2 | 1 | |

ಇವರ ನಿಯಂತ್ರಣದಲ್ಲಿ ಚನ್ನರಾಯಪಟ್ಟಣದಲ್ಲಿ ಒಂದು ಮೀನುಮರಿ ಪಾಲನಾ ಕೇಂದ್ರ ನಿರ್ವಹಿಸಲಾಗುತ್ತಿದೆ.

(3) ಬೇಲೂರು ತಾಲ್ಲೂಕು (ಬೇಲೂರು ಮತ್ತು ಸಕಲೇಶಪುರ ತಾಲ್ಲೂಕು ಒಳಗೊಂಡಂತೆ)

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2) | 1 | 1 | – | – |
| 2. | ಮೀನುಗಾರಿಕೆ ಹಿರಿಯ ಮೇಲ್ವಿಚಾರಕರು | 1 | 1 | – | ಸಕಲೇಶಪುರ ಕೇಂದ್ರಸ್ಥಾನ |
| 3. | ಮೀನುಗಾರಿಕೆ ಕ್ಷೇತ್ರಪಾಲಕರು (ಬೇಲೂರು ತಾ.ಗೆ) | 3 | 1 | 2 | |
| 4. | ಮೀನುಗಾರಿಕೆ ಕ್ಷೇತ್ರಪಾಲಕರು (ಸಕಲೇಶಪುರ ತಾ.ಗೆ) | 3 | 1 | 2 | |
| | ಒಟ್ಟು | 8 | 4 | 4 | |

ಇವರ ನಿಯಂತ್ರಣದಲ್ಲಿ ಬೇಲೂರು ಮತ್ತು ಸಕಲೇಶಪುರದಲ್ಲಿ ತಲಾ ಒಂದೊಂದು ಮೀನುಮರಿ ಪಾಲನಾ ಕೇಂದ್ರಗಳನ್ನು ನಿರ್ವಹಿಸಲಾಗುತ್ತಿದೆ. ಮೀನುಗಾರಿಕೆ ಹಿರಿಯ ಮೇಲ್ವಿಚಾರಕರು ಸಕಲೇಶಪುರ ಮೀನುಮರಿ ಪಾಲನಾ ಕೇಂದ್ರದ ನಿರ್ವಹಣೆ ಮತ್ತು ಆ ತಾಲ್ಲೂಕಿನ ಚಟುವಟಿಕೆಗಳ ನಿರ್ವಹಣೆಗೆ ಮೀನುಗಾರಿಕೆ ಸಹಾಯಕ ನಿದೇಶಕರು (ಶ್ರೇ-2) ಬೇಲೂರು ಇವರಿಗೆ ಸಹಾಯಕರಾಗಿರುತ್ತಾರೆ.

(4) ಹೊಳೆನರಸೀಪುರ ತಾಲ್ಲೂಕು:

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2) | 1 | 1 | – | – |
| 2. | ಮೀನುಗಾರಿಕೆ ಕ್ಷೇತ್ರಪಾಲಕರು | 2 | 1 | 1 | – |
| | ಒಟ್ಟು | 3 | 2 | 1 | |

(5) ಅರಸೀಕೆರೆ ತಾಲ್ಲೂಕು:

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2) | 1 | 1 | – | – |
| 2. | ಮೀನುಗಾರಿಕೆ ಕ್ಷೇತ್ರಪಾಲಕರು | 2 | – | 2 | – |
| | ಒಟ್ಟು | 3 | – | 2 | |

ಇವರ ನಿಯಂತ್ರಣದಲ್ಲಿ ಅರಸೀಕೆರೆಯಲ್ಲಿ ಮೀನುಮರಿ ಪಾಲನಾ ಕೇಂದ್ರವನ್ನು ನಿರ್ವಹಿಸಲಾಗುತ್ತಿದೆ.

(6) ಅರಕಲಗೂಡು ತಾಲ್ಲೂಕು:

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ–2) | 1 | 1 | – | – |
| 2. | ಮೀನುಗಾರಿಕೆ ಮೇಲ್ವಿಚಾರಕ | 1 | 1 | – | ಕೇಂದ್ರಸ್ಥಾನ ರಾಮನಾಥಪುರ ಮೀನುಮರಿ ಪಾಲನಾ ಕೇಂದ್ರ |
| 3. | ಮೀನುಗಾರಿಕೆ ಕ್ಷೇತ್ರಪಾಲಕ | 5 | 2 | 3 | – |
| 4. | ಕಛೇರಿ ಜವಾನ | 1 | 1 | – | – |
| | ಒಟ್ಟು | 8 | 5 | 3 | |

ಇವರ ನಿಯಂತ್ರಣದಲ್ಲಿ ರಾಮನಾಥಪುರ ಮೀನುಮರಿ ಪಾಲನಾ ಕೇಂದ್ರವನ್ನು ನಿರ್ವಹಿಸಲಾಗುತ್ತಿದ್ದು, ಇವರಿಗೆ ಈ ಕೇಂದ್ರದ ಸಹಾಯಕರಾಗಿ ಒಬ್ಬರು ಮೀನುಗಾರಿಕೆ ಮೇಲ್ವಿಚಾರಕರು ಮತ್ತು ಎರಡು ಮೀನುಗಾರಿಕೆ ಕ್ಷೇತ್ರಪಾಲಕರು ಕೆಲಸ ನಿರ್ವಹಿಸುವರು.

(7) ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ–11, ಗೊರೂರು:

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಷರಾ |
|---|---|---|---|---|---|
| 1. | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ–2) | 1 | 1 | – | – |
| 2. | ಮೀನುಗಾರಿಕೆ ಕ್ಷೇತ್ರಪಾಲಕರು | 4 | 2 | 2 | – |
| | ಒಟ್ಟು | 5 | 3 | 2 | |

ಇವರ ನಿಯಂತ್ರಣದಲ್ಲಿ ಗೊರೂರಿನಲ್ಲಿ ಒಂದು ಮೀನುಮರಿ ಪಾಲನಾ ಕೇಂದ್ರ ನಿರ್ವಹಿಸಲಾಗುತ್ತಿದೆ. ಮೀನುಮರಿ ಪಾಲನೆ, ಪೋಷಣೆ ಮತ್ತು ವಿತರಣೆ ಜೊತೆಗೆ ಹೇಮಾವತಿ ಜಲಾಶಯಕ್ಕೆ ಬಿತ್ತನೆ ಮರಿಗಳ ಬಿತ್ತನೆ ಕಾರ್ಯ ಮತ್ತು ಜಲಾಶಯದಲ್ಲಿ ಮೀನು ಶಿಕಾರಿಗೆ ಪರವಾನಗಿಯನ್ನು ನೀಡುವ ಕೆಲಸವನ್ನು ನಿರ್ವಹಿಸುವರು.

(ಇ) ಕಾರ್ಯಗಳು:

ಜಿಲ್ಲೆಯಲ್ಲಿ ಮೀನುಗಾರಿಕೆಯ ಮತ್ತು ಮೀನು ಕೃಷಿಕರ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಆರ್ಥಿಕ ನೆರವಿನ ಯೋಜನೆಗಳ ಅನುಷ್ಠಾನಗೊಳಿಸಲಾಗುತ್ತಿದೆ. ಜಿಲ್ಲಾ ಮಟ್ಟದ ಕಛೇರಿಯಲ್ಲಿ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರಿಗೆ ಕಛೇರಿ ಅಧೀಕ್ಷಕರು, ಪ್ರ.ದ.ಸ. ದ್ವಿ.ದ.ಸ., ಮತ್ತು ಇತರೆ ಸಿಬ್ಬಂದಿಯವರು ಸಹಾಯಕರಾಗಿರುತ್ತಾರೆ. ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಮೀನುಗಾರಿಕೆ ಸಹಾಯಕ ನಿರ್ದೇಶಕರು ಶ್ರೇಣಿ (2) ಇವರುಗಳಿಗೆ ಸಹಾಯಕರಾಗಿ ಮೀನುಗಾರಿಕೆ ಹಿರಿಯ ಮೇಲ್ವಿಚಾರಕ, ಮೀನುಗಾರಿಕೆ ಮೇಲ್ವಿಚಾರಕ ಮತ್ತು ಮೀನುಗಾರಿಕೆ ಕ್ಷೇತ್ರಪಾಲಕರು ಹಾಗೂ ಇತರೆ ಸಿಬ್ಬಂದಿ ವರ್ಗ ಕೆಲಸ ಮಾಡುತ್ತಿದೆ. ಈ ಕೆಳಕಂಡ ಯೋಜನೆಗಳನ್ನು ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಹಾಸನ ಇವರ ಮಾರ್ಗದರ್ಶನದ ಮೇರೆಗೆ ತಾಲ್ಲೂಕು ಮಟ್ಟದ ಅಧಿಕಾರಿಗಳು ಅನುಷ್ಠಾನಗೊಳಿಸುತ್ತಾರೆ.

1) ಮೀನುಮರಿ ಉತ್ಪಾದನೆ ಪಾಲನೆ ಮತ್ತು ವಿತರಣೆ:

ಜಿಲ್ಲೆಯಲ್ಲಿ ಒಳನಾಡು ಮೀನುಗಾರಿಕೆ ಅಭಿವೃದ್ಧಿಯನ್ನು ಗಮನದಲ್ಲಿರಿಸಿಕೊಂಡು, ಮೀನು ಕೃಷಿಕರಿಗೆ ಬಿತ್ತನೆ ಬೇಕಾದ ಉತ್ತಮ ತಳಿಯ ಮೀನುಮರಿಗಳನ್ನು ಸರ್ಕಾರ ನಿಗದಿ ಪಡಿಸಿರುವ ದರದಲ್ಲಿ ಈ ಕಾರ್ಯಕ್ರಮದಡಿ ಸರಬರಾಜು ಮಾಡಲಾಗುತ್ತಿದೆ. ಇದಕ್ಕಾಗಿ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ (ಹೊಳೆನರಸೀಪುರ ಹೊರತುಪಡಿಸಿ) ಮತ್ತು ಗೊರೂರಿನಲ್ಲಿ ಒಂದು ಮೀನುಮರಿ ಪಾಲನಾ ಕೇಂದ್ರ ಒಳಗೊಂಡಂತೆ ಜಿಲ್ಲೆಯಲ್ಲಿ ಒಟ್ಟು ಏಳು ಕೇಂದ್ರಗಳನ್ನು ನಿರ್ಮಾಣ ಮಾಡಿ, ಈ ಕೇಂದ್ರಗಳಲ್ಲಿ ಅತಿ ಸಣ್ಣ ಮೀನುಮರಿಯನ್ನು ಸರ್ಕಾರಿ ಮೀನುಮರಿ ಉತ್ಪಾದನಾ ಕೇಂದ್ರಗಳಿಂದ ಆಮದು ಮಾಡಿಕೊಂಡು, ಅವುಗಳನ್ನು ಬಿತ್ತನೆ ಗಾತ್ರದವರೆವಿಗೆ ಪೋಷಣೆ ಮಾಡಿ ಮೀನು ಕೃಷಿಕರಿಗೆ ಈ ಕೆಳಕಂಡಂತೆ ವಿವಿಧ ಜಾತಿಯ ಮೀನುಮರಿಗಳನ್ನು ಅವುಗಳ ಹೆಸರಿನ ಮುಂದೆ ಹೇಳಲಾದ ದರದಲ್ಲಿ ಸರಬರಾಜು ಮಾಡಲಾಗುತ್ತದೆ.

| ಕ್ರ. ಸಂ. | ಮೀನಿನ ಹೆಸರು | ಒಂದು ಸಾವಿರಕ್ಕೆ ನಿಗದಿ ಪಡಿಸಲಾದ ದರ (ರೂ.) | ಪ್ಯಾಕಿಂಗ್ ಚಾರ್ಜ್ (ಒಂದು ಪ್ಯಾಕೆಟ್‌ಗೆ) (ರೂ.) |
|---|---|---|---|
| 1. | ಕಾಟ್ಲಾ | 258/– | 4/– |
| 2. | ರೋಹು | 240/– | 4/– |
| 3. | ಮೃಗಾಲ್ | 210/– | 4/– |
| 4. | ಹುಲ್ಲುಗೆಂಡೆ | 400/– | 4/– |
| 5. | ಸಾಮಾನ್ಯ ಗೆಂಡೆ | 200/– | 4/– |

**2) ಬಾವಿ ಮತ್ತು ಹೊಂಡಗಳಲ್ಲಿ ಮೀನುಗಾರಿಕೆ ಅಭಿವೃದ್ಧಿಗಾಗಿ ಸಹಾಯ:**

ಈ ಯೋಜನೆಯಡಿ ಸಣ್ಣ ಮತ್ತು ಅತಿ ಸಣ್ಣ ಕೃಷಿಕರಿಗೆ ಅವರ ಸ್ವಂತ ಬಾವಿ ಮತ್ತು ಕೃಷಿ ಹೊಂಡಗಳಲ್ಲಿ ಮೀನು ಕೃಷಿಯನ್ನು ತೆಗೆದುಕೊಳ್ಳಲು 1 ಗುಂಟೆ ಜಲಾವೃತ್ತ ಪ್ರದೇಶಕ್ಕೆ 1.00 ಬಿತ್ತನೆ ಮರಿಯಂತೆ ಗರಿಷ್ಟ 10 ಗುಂಟೆ ಜಲಾವೃತ್ತ ಪ್ರದೇಶದವರೆವಿಗೆ ಶೇ.100ರ ಸಹಾಯಧನ ರೂಪದಲ್ಲಿ ಪೂರೈಸಲಾಗುವುದು.

**3) ಸಿಹಿ ನೀರು ಮೀನುಗಳಿಗಾಗಿ ಸಹಾಯಧನ:**

ಈ ಯೋಜನೆಯಡಿ ಈಗಾಗಲೇ ಮೀನು ಕೃಷಿ ಕೊಳವನ್ನು ಹೊಂದಿರುವಂತಹ ಮೀನು ಕೃಷಿಕರಿಗೆ 1 ಎಕರೆ ಅಥವಾ ಅರ್ಧ ಎಕರೆ ಜಲಾವೃತ್ತ ಪ್ರದೇಶದಲ್ಲಿ ಸಿಹಿ ನೀರು ಸೀಗಡಿ ಕೃಷಿಯನ್ನು ಕೈಗೊಳ್ಳಲು ಅಂತಹ ಕೃಷಿಕರಿಗೆ ಪ್ರತಿ ಎಕರೆಗೆ ಘಟಕ ವೆಚ್ಚ ರೂ.0.40 ಲಕ್ಷದಲ್ಲಿ ಶೇ.50 ರಷ್ಟನ್ನು ಸಹಾಯಧನ ರೂಪದಲ್ಲಿ ಗರಿಷ್ಟ ರೂ.0.20 ಲಕ್ಷಗಳಿಗೆ ಮೀರದಂತೆ ಉತ್ತಮ ತಳಿಯ ಸಿಹಿನೀರು ಸೀಗಡಿ ಮತ್ತು ಸೀಗಡಿ ಆಹಾರವನ್ನು ಸರಬರಾಜು ಮಾಡಲಾಗುವುದು. ಅರ್ಧ ಎಕರೆ ಪ್ರದೇಶಕ್ಕೆ ಅನುಗುಣವಾಗಿ ಘಟಕ ವೆಚ್ಚದ ಅರ್ಧದಷ್ಟು ಅಂದರೆ ಗರಿಷ್ಟ ರೂ.0.10 ಲಕ್ಷಗಳಿಗೆ ಮೀರದಂತೆ ಉತ್ತಮ ತಳಿಯ ಸೀಗಡಿ ಮರಿ ಮತ್ತು ಸೀಗಡಿ ಆಹಾರವನ್ನು ಸರಬರಾಜು ಮಾಡಲಾಗುವುದು.

**4) ಮೀನು ಕೃಷಿ ಕೊಳ ನಿರ್ಮಾಣಕ್ಕಾಗಿ ಸಹಾಯಧನ:**

ಈ ಯೋಜನೆಯಡಿ ಖಾಸಗಿ ಕೃಷಿಕರು ಹೊಸದಾಗಿ ಮೀನು ಕೃಷಿ ಕೈಗೊಳ್ಳಲು ಮುಂದೆ ಬಂದು, ಅವರ ಜಮೀನಿನಲ್ಲಿ ಒಂದು ಎಕರೆ ವಿಸ್ತೀರ್ಣದ ಮೀನು ಕೃಷಿ ಕೊಳ ನಿರ್ಮಿಸಲು ಅವರಿಗೆ ಘಟಕ ವೆಚ್ಚ ರೂ.0.40 ಲಕ್ಷಗಳಲ್ಲಿ ಗರಿಷ್ಟ ರೂ.0.10 ಲಕ್ಷಕ್ಕೆ ಮೀರದಂತೆ ಶೇ.25 ರಷ್ಟು ಸಹಾಯಧನ ನೀಡಲಾಗುವುದು. ಅರ್ಧ ಎಕರೆ ಪ್ರದೇಶದ ಮೀನು ಕೃಷಿ ಕೊಳಕ್ಕೆ ಘಟಕ ವೆಚ್ಚ ರೂ.0.20 ಲಕ್ಷಗಳಲ್ಲಿ ಗರಿಷ್ಟ ರೂ.0.05 ಲಕ್ಷ ಮೀರದಂತೆ ಶೇ.25 ರಷ್ಟು ಸಹಾಯಧನ ನೀಡಲಾಗುವುದು.

**5) ಮೀನುಗಾರಿಕೆ ಕಟ್ಟಡಗಳು ಸೌಲಭ್ಯಗಳ ನಿರ್ಮಾಣ ಮತ್ತು ನಿರ್ವಹಣೆ:**

ಈ ಯೋಜನೆಯಡಿ ಇಲಾಖೆಗೆ ಬೇಕಾದ ಕಛೇರಿ ಕಟ್ಟಡಗಳು, ಪ್ಯಾಕಿಂಗ್ ಷೆಡ್, ಮೀನುಮರಿ ಪಾಲನಾ ಕೊಳಗಳ ನಿರ್ಮಾಣ, ದುರಸ್ತಿ ಪಂಪ್ ಹೌಸ್ ನಿರ್ಮಾಣ ಮತ್ತು ದುರಸ್ತಿ ಕಾಂಪೌಂಡ್ ಮತ್ತು ತಂತಿ ಬೇಲಿ ನಿರ್ಮಾಣ ಮತ್ತು ದುರಸ್ತಿ ಅಕ್ವೇರಿಯಂ ನಿರ್ಮಾಣ ಮತ್ತು ದುರಸ್ತಿ ಹಾಗೂ ಸದರಿ ಕಟ್ಟಡಗಳು, ಕೊಳಗಳು, ಪ್ಯಾಕಿಂಗ್ ಷೆಡ್, ಕಾಂಪೌಂಡ್, ತಂತಿ ಬೇಲಿಗಳು ಅಕ್ವೇರಿಯಂ ಇತ್ಯಾದಿಯ ನಿರ್ವಹಣೆ ಮಾಡಲಾಗುವುದು. ಮೇಲ್ಕಂಡ ಕಾಮಗಾರಿಗಳನ್ನು ಸ್ಥಳೀಯ ಜಿಲ್ಲಾ ಪಂಚಾಯಿತಿ ಇಂಜಿನಿಯರಿಂಗ್ ವಿಭಾಗ, ಭೂಸೇನಾ ನಿಗಮ ಮತ್ತು ಇಲಾಖೆಯಿಂದ ತೆಗೆದುಕೊಳ್ಳಲಾಗುವುದು.

**6) ಮೀನು ಮಾರುಕಟ್ಟೆ ಮತ್ತು ಮತ್ಸ್ಯವಾಹಿನಿಗೆ ಸಹಾಯ:**

ಈ ಯೋಜನೆಯಡಿ ವೃತ್ತಿ ನಿರತ ಮೀನುಗಾರರು ಅವರು ಹಿಡಿದ ಮೀನುಗಳನ್ನು ತಾಜವಾಗಿ ಕೊಂಡೊಯ್ದು ಮಾರಾಟ ಮಾಡಲು ಹಾಗೂ ಒಂದೆಡೆಯಿಂದ ಇನ್ನೊಂದೆಡೆಗೆ ಸುಲಭವಾಗಿ ಮತ್ತು ಬೇಗನೆ ಸಾಗಿಸಲು ಪ್ಲಾಸ್ಟಿಕ್ ಪೆಟ್ಟಿಗೆ ಮತ್ತು ಬೈಸಿಕಲ್‌ಗಳನ್ನು ಶೇ.50ರ ಸಹಾಯಧನದಲ್ಲಿ ನೀಡಲಾಗುವುದು. ಮತ್ಸ್ಯವಾಹಿನಿ ವಾಹನ ಖರೀದಿಸಲು ಘಟಕ ವೆಚ್ಚ ರೂ.1.00 ಲಕ್ಷದಲ್ಲಿ ಶೇ.25 ರಷ್ಟು ಅಂದರೆ ಗರಿಷ್ಟ ರೂ.0.25 ಲಕ್ಷಕ್ಕೆ ಮೀರದಂತೆ ಸಹಾಯಧನ ನೀಡಲಾಗುವುದು.

**7) ವಸ್ತು ಪ್ರದರ್ಶನ ಮತ್ತು ತರಬೇತಿ:**

ಮೀನುಗಾರಿಕೆಯಲ್ಲಿ ವಿಶೇಷ ಸಂಶೋಧನೆಗಳು, ಮೀನು ಕೃಷಿಗೆ ಇಲಾಖೆಯಿಂದ ದೊರೆಯುವ ಸೌಲಭ್ಯಗಳು, ಅಲಂಕಾರಿಕಾ ಮೀನುಗಳ ಪ್ರದರ್ಶನ ಮತ್ತು ಇತರೆ ಅಭಿವೃದ್ಧಿ ಪರ ಕಾರ್ಯಕ್ರಮಗಳ ಪ್ರದರ್ಶನವನ್ನು ಜನ ಸಮೂಹದ ಸಭೆ, ಸಮಾರಂಭ, ಜಾತ್ರೆ, ಕೃಷಿ ಮೇಳ ಇತ್ಯಾದಿ ಕಡೆ ಪ್ರದರ್ಶಿಸಲಾಗುವುದು, ಮತ್ತು ಮೀನುಗಾರರಿಗೆ ಮೀನುಗಾರಿಕೆಯಲ್ಲಿನ ಇತ್ತೀಚಿನ ತಾಂತ್ರಿಕತೆ ಬಗ್ಗೆ ಅರಿವು ಮೂಡಿಸಲಾಗುವುದು.

**8) ಜಿಲ್ಲಾ ಕೇಂದ್ರದಲ್ಲಿ ಮತ್ಸ್ಯಾಗಾರ ನಿರ್ವಹಣೆ:**

ಹಾಸನ ನಗರದ ಮಹಾರಾಜ ಪಾರ್ಕಿನಲ್ಲಿ ನಿರ್ಮಿಸಲಾಗಿರುವ ಮತ್ಸ್ಯಾಗಾರದಲ್ಲಿ ವಿವಿಧ ಜಾತಿಯ ಅಲಂಕಾರಿಕ ಮೀನುಗಳನ್ನು ವಿವಿಧ ಜಾತಿಯ ಸಸ್ಯ ಆಟಿಕೆ ಗೊಂಬೆಗಳು ಇತ್ಯಾದಿಯನ್ನು ಅಳವಡಿಸಿ ವಿದ್ಯುತ್ ದೀಪಗಳ ಅಲಂಕಾರದೊಂದಿಗೆ ಜಿಲ್ಲೆಯ ಹಾಗೂ ಇತರೆ ನಾಗರೀಕರಿಗೆ, ಮಕ್ಕಳಿಗೆ ಪ್ರದರ್ಶಿಸಿ ಉತ್ತಮ ಮನರಂಜನೆಯನ್ನು ನೀಡಲಾಗುತ್ತಿದೆ.

**II ಕೈಪಿಡಿ 2:**

**ಅಧಿಕಾರಿ ಮತ್ತು ಸಿಬ್ಬಂದಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು**

ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು ಕಛೇರಿಯ ಮುಖ್ಯಸ್ಥರಾಗಿದ್ದು ಕಛೇರಿಯ ಅಧೀನ ಕಛೇರಿಗಳಾದ ಹಾಸನ, ಚನ್ನರಾಯಪಟ್ಟಣ, ಬೇಲೂರು, ಹೊಳೆನರಸೀಪುರ, ಅರಸೀಕೆರೆ, ಅರಕಲಗೂಡು ಮತ್ತು ಗೊರೂರು ಕಛೇರಿಗಳ ಕೆಲಸ ಕಾರ್ಯಗಳ ಮೇಲಾಧಿಕಾರಿಯಾಗಿರುತ್ತಾರೆ. ಜಿಲ್ಲಾ ಪಂಚಾಯತ್, ಹಾಸನ, ಮೀನುಗಾರಿಕೆ ನಿರ್ದೇಶಕರು, ಬೆಂಗಳೂರು ಮತ್ತು ಮೀನುಗಾರಿಕೆ ಉಪನಿರ್ದೇಶಕರು, ಮೈಸೂರು ಇವರ ಅಧೀನದಲ್ಲಿ ಮತ್ತು ಅವರ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುವರು. ಇವರ ಕಛೇರಿಯಲ್ಲಿ ಮುಖ್ಯವಾಗಿ ಈ ಕೆಳಕಂಡಂತೆ ಸಿಬ್ಬಂದಿ ಮತ್ತು ಆಡಳಿತ ಶಾಖೆ, ಲೆಕ್ಕಪತ್ರ ಶಾಖೆ ಅಭಿವೃದ್ಧಿ ಶಾಖೆಗಳು ಕಾರ್ಯನಿರ್ವಹಿಸುತ್ತಿದೆ.

**(1) ಸಿಬ್ಬಂದಿ/ ಆಡಳಿತ ಶಾಖೆ ಮತ್ತು ಲೆಕ್ಕ**

ಈ ವಿಭಾಗದಲ್ಲಿ ಒಬ್ಬರು ಪ್ರ.ದ.ಸ. ರಿದ್ದು ಇವರು ನೌಕರರ ಸೇವಾ ವಿವರಗಳು, ನೌಕರರ ರಜೆ ಮಂಜೂರಾತಿ, ನಿವೃತ್ತಿ ವೇತನ ಮಂಜೂರಾತಿ, ಅಧಿಕಾರಿ/ ನೌಕರರ ಶಿಸ್ತು ಪ್ರಕರಣ, ಕಛೇರಿ ನೌಕರರ ಮತ್ತು ಅಧೀನ ಅಧಿಕಾರಿಗಳ ವಾರ್ಷಿಕ ವೇತನ ಬಡ್ತಿ ಬಿಡುಗಡೆ, ನೌಕರರ ನಿಯೋಜನೆ ವೇತನ ಬಿಲ್ಲುಗಳು ತಯಾರಿಕೆ, ಪ್ರಯಾಣಭತ್ಯೆ ಡಿ.ಸಿ.ಬಿಲ್ಲುಗಳ ತಯಾರಿಕೆ ಮತ್ತು ಮೇಲು ಸಹಿ ಮಾಡುವುದು ವೈದ್ಯಕೀಯ ವೆಚ್ಚಗಳು ಮರು ಪಾವತಿ ಬಿಲ್ಲುಗಳ ತಯಾರಿಕೆ, ವೇತನ ಆಯ-ವ್ಯಯ ತಯಾರಿಕೆ, ಅನುದಾನ ಮರು ಹಂಚಿಕೆ, ವಿದ್ಯುಚ್ಛಕ್ತಿ, ದೂರವಾಣಿ ವೆಚ್ಚ, ಕಛೇರಿ ಬಾಡಿಗೆ ಇತ್ಯಾದಿಗೆ ಸಂಬಂಧಿಸಿದಂತೆ ಡಿ.ಸಿ.ಬಿಲ್ಲು ತಯಾರಿಸಿ ಪಾವತಿಸುವುದು, ಮಾಸಿಕ ವೆಚ್ಚದ ಮತ್ತು ಆದಾಯದ ಪ್ರಗತಿ ವರದಿಯನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಕಳುಹಿಸುವುದು, ನಗದು ಪುಸ್ತಕ ಮತ್ತು ಡಿ.ಸಿ. ಬಿಲ್ಲು ಪುಸ್ತಕಗಳ ನಿರ್ವಹಣೆ ಅಧೀನಾಧಿಕಾರಿಗಳ ಕಛೇರಿ ಲೆಕ್ಕಪತ್ರ ತಪಾಸಣೆ, ಆಡಿಟ್ ಪ್ಯಾರಾಗಳಿಗೆ ಅನುಪಾಲನಾ ವರದಿ ತಯಾರಿಸುವುದು, ಕಛೇರಿಗೆ ಬೇಕಾದ ಲೇಖನ ಸಾಮಗ್ರಿ ಇತರೆ ಸಾಮಗ್ರಿಗಳ ಖರೀದಿ ದುರಸ್ತಿ ಇತ್ಯಾದಿಗೆ ಸಂಬಂಧಿಸಿದ ಕಡತಗಳನ್ನು ವಹಿಗಳನ್ನು ನಿರ್ವಹಿಸಲಾಗುತ್ತದೆ.

**2) ಅಭಿವೃದ್ಧಿ ಶಾಖೆ:**

ಈ ಶಾಖೆಯಲ್ಲಿ ಒಬ್ಬರು ದ್ವಿ.ದ.ಸ. ರಿದ್ದು, ಇವರು ಕೆರೆಗಳ ಮೀನುಪಾಶುವಾರು ಹಕ್ಕಿನ ವಿಲೇವಾರಿ, ಮೀನುಮರಿ ಪಾಲನಾ ಕೇಂದ್ರಗಳ ನಿರ್ವಹಣೆ, ಮೀನುಮರಿ ಪಾಲನೆ ಮತ್ತು ವಿತರಣೆ ಕೆಲಸಗಳು, ಕಛೇರಿ ವಾಹನದ ನಿರ್ವಹಣೆಗೆ ಸಂಬಂಧಿಸಿದ ವಿಷಯ, ಅಧಿಕಾರಿ/ ಸಿಬ್ಬಂದಿಯ ತರಬೇತಿ, ಮೀನುಗಾರರ ಸಹಕಾರ ಸಂಘಗಳ ನಿರ್ವಹಣೆ, ಮತ್ತು ಅವುಗಳಿಗೆ ನೀಡಲಾದ ಸಾಲ/ ಷೇರುಬಂಡವಾಳ ವಸೂಲಾತಿ, ಮೀನುಗಾರರ ಸಂಕಷ್ಟ ಪರಿಹಾರಕ್ಕೆ ಸಂಬಂಧಿಸಿದ ವಿಷಯಗಳು, ಅಧಿಕಾರಿಗಳ ಪ್ರವಾಸ ವರದಿ, ನಿರ್ವಸತಿ ಮೀನುಗಾರರಿಗೆ ವಸತಿ ಸೌಕರ್ಯಕ್ಕೆ ಮತ್ಸ್ಯ ಆಶ್ರಯ ಯೋಜನೆ ಅನುಷ್ಠಾನ, ಕಛೇರಿಗೆ ಬರುವ ದೈನಂದಿನ ಪತ್ರಗಳ ಸ್ವೀಕೃತಿ, ರವಾನಿಸುವುದು, ಪತ್ರಗಳ ರಿಜಿಸ್ಟರ್‌ಗಳ ನಿರ್ವಹಣೆ, ಅಂಚೆ ಸೇವಾ ಚೀಟಿಗಳ ದಾಖಲೆ ನಿರ್ವಹಣೆ ಇತ್ಯಾದಿ ವಿಷಯಕ್ಕೆ ಸಂಬಂಧಿಸಿದ ಕಡತಗಳನ್ನು ವಹಿಗಳನ್ನು ನಿರ್ವಹಿಸುವುದು.

**3) ಯೋಜನಾ ಶಾಖೆ:**

ಈ ಶಾಖೆಯಲ್ಲಿ ಒಬ್ಬರು ದ್ವಿ.ದ.ಸ. ರಿದ್ದು ಇವರು ವಾರ್ಷಿಕ ಯೋಜನೆಯ ರೂಪರೇಖೆಗಳ ತಯಾರಿಸುವುದು, ಯೋಜನಾ ಕಾರ್ಯಕ್ರಮಗಳಿಗೆ ಅನುದಾನ ಮರು ಹಂಚಿಕೆ ಮಾಡುವುದು, ಇಲಾಖೆಯ ಕ್ರಿಯಾ ಯೋಜನೆ ತಯಾರಿಸುವುದು, ಆಡಳಿತ ವರದಿ ತಯಾರಿಸುವುದು. ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಪ್ರಗತಿ ಪರಿಶೀಲಿಸಲು ಅಧೀನ ಅಧಿಕಾರಿಗಳಿಂದ ಮಾಸಿಕ ವರದಿ ಪಡೆಯುವುದು, ಮೀನುಗಾರಿಕೆ ಇಲಾಖೆಯ ವಿವಿಧ ಕಛೇರಿ, ಮೀನುಮರಿ ಪಾಲನಾ ಕೇಂದ್ರಗಳ ಕಾಮಗಾರಿಗಳ ಅನುಷ್ಠಾನ, ವಿವಿಧ ಯೋಜನೆಗಳ ಅನುಷ್ಠಾನಕ್ಕೆ ಮಂಜೂರಾತಿ ಪಡೆದು ಅಧೀನ ಅಧಿಕಾರಿಗಳಿಗೆ ರವಾನಿಸುವುದು. ವಿವಿಧ ಯೋಜನೆಗಳ ಅನುಷ್ಠಾನ ಕುರಿತು ಮಾಸಿಕ ಪ್ರಗತಿ ವರದಿಗಳನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ನಿಗದಿತ ಕಾಲಮಿತಿಯೊಳಗೆ ಕಳುಹಿಸುವುದು. ಮೀನುಗಾರಿಕೆ ವಸ್ತು ಪ್ರದರ್ಶನ, ಸಂಶೋಧನೆ, ಮತ್ತು ವಿಸ್ತರಣೆ ಚಟುವಟಿಕೆಗಳ ವಿಷಯ, ಮತ್ಸ್ಯಾಲಯದ ನಿರ್ವಹಣೆಯ ವಿಷಯ ಇತ್ಯಾದಿಗೆ ಸಂಬಂಧಿಸಿದಂತೆ ಕಡತಗಳು ಮತ್ತು ವಹಿಗಳನ್ನು ನಿರ್ವಹಿಸುವುದು.

**4) ಬೆರಳಚ್ಚು ಶಾಖೆ:**

ಈ ಶಾಖೆಯಲ್ಲಿ ಒಬ್ಬರು ಬೆರಳಚ್ಚುಗಾರರಿದ್ದು ಇವರು ಕಛೇರಿಯ ಪತ್ರ ವ್ಯವಹಾರಕ್ಕೆ ಬೇಕಾದ ಕಾಗದ ಪತ್ರಗಳನ್ನು ಬೆರಳಚ್ಚು ಮಾಡಿಕೊಡುವರು ಮತ್ತು ಕಂಪ್ಯೂಟರ್ ಮೂಲಕವೂ ಸಹ ಕಾಗದ ಪತ್ರಗಳನ್ನು ತಯಾರಿಸಿಕೊಡುವರು ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರವರ ದಿನಚರಿ ಮತ್ತು ಪ್ರವಾಸ ವರದಿಯನ್ನು ಬೆರಳಚ್ಚು ಮಾಡುವರು.

5) ಇನ್ನುಳಿದಂತೆ ಈ ಕಛೇರಿಯಲ್ಲಿರುವ ಎರಡು ಜನ ಡಿ ದರ್ಜೆ ನೌಕರರಿದ್ದು ಇವರು ಸ್ಥಳೀಯ ಬಟವಾಡೆ, ಖಜಾನೆ, ಬ್ಯಾಂಕು, ಅಂಚೆ ಕಛೇರಿಗಳಲ್ಲಿ ಆಗಬೇಕಾಗಿರುವ ಕೆಲಸಗಳ ನಿರ್ವಹಣೆ ಮಾಡುವರು.

ಕಛೇರಿ ಸಿಬ್ಬಂದಿ ವರ್ಗದವರು ಅಂದರೆ ಆಮದು ಸಂಕಲನದ ನಿರ್ವಾಹಕರು ಸರ್ಕಾರದಿಂದ ಮೇಲಾಧಿಕಾರಿಗಳಿಂದ, ಇತರ ಸರ್ಕಾರಿ/ ಅರೆಸರ್ಕಾರಿ/ ಸ್ವಾಯತ್ತಾ ಸಂಸ್ಥೆ, ಸಾರ್ವಜನಿಕರು, ಫಲಾನುಭವಿಗಳು, ಅಧೀನ ಕಛೇರಿಗಳಿಂದ ಬರುವ ಎಲ್ಲಾ

ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಹಿಯಲ್ಲಿ ಸ್ವೀಕರಿಸಿ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಹಾಸನ ರವರು ಕಿರು ಸಹಿ ಮಾಡಿದ ನಂತರ ಸಾಮಾನ್ಯ ಸ್ವೀಕೃತಿ ವಹಿಯಲ್ಲಿ ನೊಂದಾಯಿಸಿಕೊಳ್ಳಲಾಗುತ್ತದೆ. ನಂತರ ಅವುಗಳನ್ನು ಸಂಬಂಧಿಸಿದ ಸಂಕಲನಗಳ ವಿಷಯ ನಿರ್ವಾಹಕರುಗಳಿಗೆ ನೀಡಿ ಸ್ವೀಕೃತಿ ರುಜು ಪಡೆಯಲಾಗುವುದು. ಕಛೇರಿಯಲ್ಲಿನ ವಿಷಯ ನಿರ್ವಾಹಕರುಗಳು ಅವರ ಸಂಕಲಗಳಿಗೆ ಸ್ವೀಕೃತವಾಗುವ ಪತ್ರಗಳನ್ನು ಅವರವರ ದಿನವಹಿಯಲ್ಲಿ ನಮೂದಿಸಿಕೊಂಡು ಕಛೇರಿ ಕೈಪಿಡಿ ಪ್ರಕಾರ ಕಡತದಲ್ಲಿ ಟಿಪ್ಪಣಿ ಹಾಕಿ ಕಛೇರಿ ಅಧೀಕ್ಷಕರಿಗೆ ಮಂಡಿಸುವರು, ವಿಷಯ ನಿರ್ವಾಹಕರುಗಳಿಂದ ಬರುವಂತಹ ಕಡತಗಳನ್ನು ಕಛೇರಿ ಅಧೀಕ್ಷಕರು ಪರಿಶೀಲಿಸಿ ಅವರ ಅಭಿಪ್ರಾಯದೊಂದಿಗೆ ಕಛೇರಿ ಮುಖ್ಯಸ್ಥರಾದ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರಿಗೆ ಮಂಡಿಸುವರು. ನಂತರ ಕಛೇರಿ ಮುಖ್ಯಸ್ಥರು ಅವರ ಪ್ರಾಧಿಕಾರದೊಳಗಿನ ವಿಷಯಗಳ ಮೇಲೆ ತೀರ್ಮಾನ ತೆಗೆದುಕೊಳ್ಳುವರು. ಒಂದು ವೇಳೆ ಅವರ ಪ್ರಾಧಿಕಾರಕ್ಕೂ ಮೀರಿದ ವಿಷಯಗಳ ಮೇಲೆ ಅಂತಿಮ ತೀರ್ಮಾನ ಅಥವಾ ಮಂಜೂರಾತಿ ಪ್ರಕರಣಗಳಲ್ಲಿ ಮೇಲಾಧಿಕಾರಿಗಳ ಅಂತಿಮ ತೀರ್ಮಾನಕ್ಕಾಗಿ ಅಥವಾ ಮಂಜೂರಾತಿಗಾಗಿ ನಿಯಮಾನುಸಾರ ಟಿಪ್ಪಣಿಯನ್ನು ನಮೂದಿಸಿ ಅದರಂತೆ ಮೇಲಾಧಿಕಾರಿಗಳಿಗೆ ಪತ್ರಗಳನ್ನು ಕಳುಹಿಸಿಕೊಟ್ಟು ಅವರಿಂದ ಬರುವ ಅಂತಿಮ ತೀರ್ಮಾನ ಅಥವಾ ಮಂಜೂರಾತಿ ಮೇರೆಗೆ ಮುಂದಿನ ಅನುಷ್ಠಾನ ಕ್ರಮ ಕೈಗೊಳ್ಳಲಾಗುತ್ತದೆ.

**III ಕೈಪಿಡಿ 3:**

**ಮೇಲ್ವಿಚಾರಣೆ ಮತ್ತು ಜವಾಬ್ದಾರಿಗಳನ್ನು ಒಳಗೊಂಡಂತೆ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕ್ರಮಗಳು:**

ಮೇಲೆ ತಿಳಿಸಿರುವ ಕೈಪಿಡಿ 1 ರಲ್ಲಿ ಕಾಣಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ಅಧೀನದಲ್ಲಿ ಕಾರ್ಯನಿರ್ವಹಿಸುವರು. ಜಿಲ್ಲಾ ಮಟ್ಟದ ಈ ಕಛೇರಿಯಲ್ಲಿ ಎಲ್ಲಾ ವಿಷಯಗಳ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು ಇವರಿಗೆ ಇರುತ್ತದೆ.

**ಅಧಿಕಾರಿಗಳು, ಕರ್ತವ್ಯಗಳು ಮತ್ತು ಮೇಲ್ವಿಚಾರಣೆ:**

1) ಈ ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಹಿಯಲ್ಲಿ ದಾಖಲೆ ಮಾಡಿ ಕಛೇರಿ ಕೈಪಿಡಿ ಪ್ರಕಾರ ಮುಂದಿನ ಕ್ರಮಕ್ಕೆ ಸಂಬಂಧಿಸಿದ ಸಂಕಲನಗಳ ಸಹಾಯಕರುಗಳಿಗೆ ನೀಡುವುದು.
2) ಸಾರ್ವನಿಕರಿಂದ ಸ್ವೀಕರಿಸಲಾಗುವ ಕಾಗದ ಪತ್ರಗಳಿಗೆ ಸ್ವೀಕೃತಿ ನೀಡುವುದು.
3) ಅರೆ ಸರ್ಕಾರಿ ಪತ್ರಗಳು, ಸಚಿವರು, ಶಾಸಕರುಗಳಿಂದ ಬರುವ ಪತ್ರಗಳನ್ನು ಪ್ರತ್ಯೇಕ ವಹಿಯಲ್ಲಿ ನಮೂದಿಸಿ ಜರೂರು ಕ್ರಮ ಜರುಗಿಸುವುದು.
4) ಅಧೀನ ಅಧಿಕಾರಿಗಳಿಂದ ವರದಿಯನ್ನು ಪಡೆಯಲು ಕಾಲಾವಧಿ ನಿಗದಿಪಡಿಸುವುದು.
5) ಇಲಾಖಾ ಅಧಿಕಾರಿ/ ಸಿಬ್ಬಂದಿಯವರಿಗೆ ತರಬೇತಿ ಕೊಡಿಸುವುದು.
6) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಗೆ ಸೂಕ್ತ ಕ್ರಮ ಕೈಗೊಳ್ಳುವುದು.
7) ಜಿಲ್ಲೆಯಲ್ಲಿನ 40 ಹೆಕ್ಟೇರ್ ಮೇಲ್ಪಟ್ಟು ಅಚ್ಚುಕಟ್ಟುವುಳ್ಳ ಎಲ್ಲಾ ಕೆರೆಗಳ ಮೀನುಪಾಶುವಾರು ಹಕ್ಕನ್ನು ಟೆಂಡರ್ ಯಾ ಹರಾಜು ಮೂಲಕ ಅಥವಾ ಗುತ್ತಿಗೆ ಮೂಲಕ ವಿಲೇವಾರಿ ಮಾಡಿಸುವ ಬಗ್ಗೆ ನಿಯಮಾನುಸಾರ ಕ್ರಮ ಕೈಗೊಳ್ಳುವುದು.
8) ಚಾಲ್ತಿಯಲ್ಲಿರುವ ಜಿಲ್ಲಾ ವಲಯ ಮತ್ತು ರಾಜ್ಯವಲಯ ಯೋಜನೆಗಳ ಅನುಷ್ಠಾನದ ಮೇಲ್ವಿಚಾರಣೆ ಮತ್ತು ನಿಯಂತ್ರಣ.
9) ಅಧಿನಿಯಮ ಹಾಗೂ ಬೇರೆ ಯಾವುದೇ ಕಾನೂನಿನ ಮೇರೆಗೆ ಪ್ರದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸುವುದು.
10) ಜಿಲ್ಲಾ ಮಟ್ಟದ ಯೋಜನೆಗಳ ಅನುಷ್ಠಾನಕ್ಕೆ ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿ ಅನುಮೋದನೆ ಪಡೆದುಕೊಂಡು ತಾಲ್ಲೂಕು ಮಟ್ಟದ ಅಧಿಕಾರಿಗಳ ಮೂಲಕ ಅವುಗಳನ್ನು ಅನುಷ್ಠಾನಗೊಳಿಸುವುದು.
11) ರಾಜ್ಯವಲಯ ಯೋಜನೆಗಳ ಅನುಷ್ಠಾನಕ್ಕೆ ಮೀನುಗಾರಿಕೆ ಇಲಾಖೆಯ ಮೇಲಾಧಿಕಾರಿಗಳ ಮಂಜೂರಾತಿ ಪಡೆದು ತಾಲ್ಲೂಕು ಮಟ್ಟದ ಅಧಿಕಾರಿಗಳ ಮೂಲಕ ಅವುಗಳನ್ನು ಅನುಷ್ಠಾನಗೊಳಿಸುವುದು.
12) ತಾಲ್ಲೂಕು ಪಂಚಾಯಿತಿ ಯೋಜನೆಗಳ ಅನುಷ್ಠಾನವನ್ನು ಆಯಾ ತಾಲ್ಲೂಕು ಪಂಚಾಯಿತಿಯ ಅನುಮೋದನೆ ಮೇರೆಗೆ ಆಯಾ ಅಧಿಕಾರಿಗಳ ಮೂಲಕ ನಿರ್ವಹಿಸಲಾಗುವುದು.
13) ಜಿಲ್ಲಾ ಕೇಂದ್ರದಲ್ಲಿನ ಕಛೇರಿ ಸಿಬ್ಬಂದಿ ಮತ್ತು ತಾಲ್ಲೂಕು ಕೇಂದ್ರಗಳಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಯವರುಗಳನ್ನು ನಿಯಂತ್ರಿಸುವುದು.
14) ವಿವಿಧ ಯೋಜನೆಗಳ ಪ್ರಗತಿ ವರದಿಯನ್ನು ಆದಾಯದ ಪ್ರಗತಿ ವರದಿಯನ್ನು ಪ್ರತಿ ಮಾಹೆ ಮೇಲಾಧಿಕಾರಿಗಳಿಗೆ ಕಳುಹಿಸಿಕೊಡುವುದು.
15) ಪ್ರತಿ ಮಾಹೆಯ ಖರ್ಚು ವೆಚ್ಚ ಮತ್ತು ಆದಾಯದ ಪ್ರಗತಿ ವರದಿಯನ್ನು ಮೇಲಾಧಿಕಾರಿಗಳಿಗೆ ಕಳುಹಿಸಿಕೊಡುವುದು.

16) ತಾಲ್ಲೂಕು ಮಟ್ಟದ ಅಧಿಕಾರಿಗಳ ಮಾಸಿಕ ಸಭೆಯನ್ನು ಪ್ರತೀ ಮಾಹೆ ಮೊದಲ ವಾರದಲ್ಲಿ ನಡೆಸಿ ಪ್ರಗತಿ ಪರಿಶೀಲಿಸಿ ಸೂಕ್ತ ಮಾರ್ಗದರ್ಶನ ನೀಡುವುದು.
17) ಅಧೀನ ಕಛೇರಿಗಳ ಹಣಕಾಸಿನ ಬಿಲ್ಲುಗಳಿಗೆ ಮೇಲು ಸಹಿ ಮಾಡುವುದು ಮತ್ತು ಅಧೀನ ಅಧಿಕಾರಿಗಳ ಪ್ರವಾಸ ವರದಿ ಅನುಮೋದಿಸುವುದು.
18) ಅಧೀನ ಅಧಿಕಾರಿಗಳ ವಾರ್ಷಿಕ ಲೆಕ್ಕಪತ್ರ ತಪಾಸಣೆ ನಡೆಸುವುದು, ಅನಿರೀಕ್ಷಿತ ಭೇಟಿ ಕೊಟ್ಟು ಪ್ರಗತಿ ಪರಿಶೀಲನೆ ಮತ್ತು ಇತರೆ ಕುಂದುಕೊರತೆಗಳ ಪರಿಶೀಲನೆ ನಡೆಸುವುದು.
19) ಮೀನು ಕೃಷಿ ಕ್ಷೇತ್ರಗಳ ಸ್ಥಳ ಪರಿಶೀಲನೆ, ಮೀನುಗಾರರ ಮನೆಗಳ ಕಾಮಗಾರಿಗಳ ಸ್ಥಳ ಪರಿಶೀಲನೆ ನಡೆಸುವುದು.
20) ನದಿ ಮತ್ತು ಜಲಾಶಯಗಳಿಗೆ ಉತ್ತಮ ತಳಿಯ ಮೀನುಮರಿಗಳನ್ನು ಬಿತ್ತನೆ ಮಾಡಿಸಿ ಮೀನು ಉತ್ಪಾದನೆ ಮಾಡಿಸುವುದು. ಜಲಾಶಯ ಮತ್ತು ನದಿಗಳಲ್ಲಿ ಮೀನು ಶಿಕಾರಿಯ ಪರವಾನಗಿ ತಪಾಸಣೆ ನಡೆಸುವುದು.
21) ಕಾಲಕಾಲಕ್ಕೆ ವಸ್ತು ಪ್ರದರ್ಶನ, ತರಬೇತಿ, ಕೃಷಿ ಮೇಳ ಇತ್ಯಾದಿಯನ್ನು ಅಧೀನ ಅಧಿಕಾರಿಗಳ ಮೂಲಕ ನಡೆಸಿ ಮೀನುಗಾರರಿಗೆ, ಮೀನು ಕೃಷಿಕರಿಗೆ ಮತ್ತು ಇತರರಿಗೆ ಮೀನುಗಾರಿಕೆಯ ತಾಂತ್ರಿಕತೆ ಬಗ್ಗೆ ಅರಿವು ಮೂಡಿಸುವುದು.
22) ವಿಶೇಷ ಘಟಕ ಯೋಜನೆ, ಗಿರಿಜನ ಉಪಯೋಜನೆ ಮತ್ತು ಇತರೆ ಯೋಜನೆಯಡಿ ಅಧೀನ ಅಧಿಕಾರಿಗಳು ನೀಡುವ ಸವಲತ್ತುಗಳ ಪರಿಶೀಲನೆ ಇತ್ಯಾದಿ.

**IV ಕೈಪಿಡಿ 4: ಕಾರ್ಯನಿರ್ವಹಿಸುವಲ್ಲಿ ಅನುಸರಿಸುವ ಮಾನದಂಡಗಳು:**

1) ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿವಿಧ ಯೋಜನೆಗಳನ್ನು ಸರ್ಕಾರವು ಅಧಿಕೃತವಾಗಿ ಹೊರಡಿಸಿರುವ ಆದೇಶಗಳು, ಸುತ್ತೋಲೆಗಳ ಅನ್ವಯ ತಾಂತ್ರಿಕ ಮೇಲ್ವಿಚಾರಣೆ ನಡೆಸುವುದು.
2) ಮೀನುಗಾರಿಕೆ ಇಲಾಖೆಯ ಅಧಿಕಾರಿಗಳ ಆರ್ಥಿಕ ಪ್ರಾಧಿಕಾರದ ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ/ 197/ ಮೀಇಸೇ/ 1995 ದಿನಾಂಕ:04.12.2002ರನ್ವಯ ಮಂಜೂರಾತಿ ನೀಡುವುದು.
3) ಸಾಮಾನ್ಯ ಅಧಿಕಾರ ಪ್ರತ್ಯಾ ಯೋಜನೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ/ 01/ ಟಿಎಫ್‌ಪಿ/ 02 ದಿನಾಂಕ:02.02.2001 ರನ್ವಯ ಮಂಜೂರಾತಿ ನೀಡುವುದು.

**V ಕೈಪಿಡಿ 5: ಕಾರ್ಯಗಳನ್ನು ನಿರ್ವಹಿಸುವಲ್ಲಿ ಕಛೇರಿ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿ ಮತ್ತು ದಾಖಲೆಗಳು:**

1) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958
2) ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977
3) ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು 1966
4) ಕರ್ನಾಟಕ ನಾಗರೀಕ ಸೇವೆಗಳು (ಸಿ.ಸಿ.ಎ.) ನಿಯಮಗಳು–1957
5) ಕರ್ನಾಟಕ ಆರ್ಥಿಕ ಸಂಹಿತೆ
6) ಖಜಾನೆ ಸಂಹಿತೆ
7) ಕರ್ನಾಟಕ ಸಾದಿಲ್ವಾರು ವೆಚ್ಚಗಳ ಕೈಪಿಡಿ
8) ಕಛೇರಿ ಕಾರ್ಯಾಲಯ ಕೈಪಿಡಿ
9) ಮೀನುಗಾರಿಕೆ ಕೈಪಿಡಿ
10) ಕರ್ನಾಟಕ ನಾಗರೀಕರ ಸೇವೆ (ಮೆಡಿಕಲ್ ಅಟೆಂಡೆನ್ಸ್) ನಿಯಮಗಳು 1956
11) ಸರ್ಕಾರಿ ಅಧಿಕಾರಿಗಳಿಗೆ ನಿಗದಿಪಡಿಸಲಾದ ಆರ್ಥಿಕ ಅಧಿಕಾರಿಗಳು ಮತ್ತು ಆರ್ಥಿಕ ಇಲಾಖೆ ಹೊರಡಿಸಿರುವ ಆದೇಶ/ ಸುತ್ತೋಲೆಗಳು
12) ಕರ್ನಾಟಕ ಭವಿಷ್ಯನಿಧಿ ನಿಯಮಗಳು
13) ಕರ್ನಾಟಕ ಸಾಮೂಹಿಕ ವಿಮಾ ಯೋಜನೆ ನಿಯಮಗಳು
14) ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ನಿಯಮಗಳು
15) ಸೇವಾ ವಿಷಯಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹೊರಡಿಸಿರುವ ಆದೇಶ, ಸುತ್ತೋಲೆಗಳು.
16) ಜಿಲ್ಲಾ ಪಂಚಾಯತ್, ಹಾಸನ ರವರಿಂದ ಹೊರಡಿಸುವ ಆದೇಶ, ಸುತ್ತೋಲೆಗಳು ಇತ್ಯಾದಿ.

**VI ಕೈಪಿಡಿ 6: ಈ ಕಛೇರಿಯು ಹೊಂದಿರುವ ದಾಸ್ತಾವೇಜುಗಳ ಪಟ್ಟಿ:**

1) ಹಾಜರಾತಿ ವಹಿ
2) ಸ್ವೀಕೃತಿ ವಹಿ
3) ರವಾನೆ ವಹಿ

